## ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1655(1953) |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಪ್ರದೀಪ್ ಶೆಟ್ಟರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 23-03-2021 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಮತ್ತು ಸಕ್ಕರೆ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | 2019-20 ಮತ್ತು 2021-22ರ ಸಾಲಿನಲ್ಲಿ ಧಾರವಾಡ, ಗದಗ ಮತ್ತು ಹಾವೇರಿ ಜಿಲ್ಲೆಗಳ ವ್ಯಾಪ್ತಿಯಲ್ಲಿ ಬರುವ ನಗರ ಸ್ಥಳೀಯ ಸಂಸ್ಥೆಗಳಿಗೆ ಸ್ವಚ್ಛ ಭಾರತ್ ಯೋಜನೆಯಡಿ ಬಿಡುಗಡೆಯಾದ ಅನುದಾನದ ಮೊತ್ತವೆಷ್ಟು? | 2019-20 ಮತ್ತು 2020-21ರ ಸಾಲಿನಲ್ಲಿ ಧಾರವಾಡ, ಗದಗ ಮತ್ತು ಹಾವೇರಿ ಜಿಲ್ಲೆಗಳ ವ್ಯಾಪ್ತಿಯಲ್ಲಿ ಬರುವ ನಗರ ಸ್ಥಳೀಯ ಸಂಸ್ಥೆಗಳಿಗೆ ಸ್ವಚ್ಛ ಭಾರತ್ ಮಿಷನ್ (ನಗರ) ಯೋಜನೆಯಡಿ ಬಿಡುಗಡೆಯಾದ ಅನುದಾನದ ವಿವರಗಳನ್ನು ಅನುಬಂಧ-1 ರಲ್ಲಿ ಲಗತ್ತಿಸಿದೆ. |
| ಆ | ಬಿಡುಗಡೆಯಾದಂತಹ ಅನುದಾನದಲ್ಲಿ ವೆಚ್ಚ ಮಾಡಲಾದ ಅನುದಾನದ ಪ್ರಮಾಣ ಎಷ್ಟು? | ಸ್ವಚ್ಛ ಭಾರತ್ ಮಿಷನ್ (ನಗರ) ಯೋಜನೆಯಡಿ ಧಾರವಾಡ, ಗದಗ ಮತ್ತು ಹಾವೇರಿ ಜಿಲ್ಲೆಗಳಿಗೆ ಒಟ್ಟು ರೂ 43.89 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದ್ದು, ಇದುವರೆವಿಗೂ ರೂ. 14.61 ಕೋಟಿಗಳನ್ನು ವೆಚ್ಚ ಮಾಡಲಾಗಿರುತ್ತದೆ. |
| ಇ | ಬಿಡುಗಡೆಯಾಗಿರುವಂತಹ ಅನುದಾನದಲ್ಲಿ ಕೈಗೊಂಡಿರುವಂತಹ ಕಾಮಗಾರಿಗಳ ಸಂಖ್ಯೆ ಎಷ್ಟು? | ಸ್ವಚ್ಛ ಭಾರತ್ ಮಿಷನ್ (ನ) ಯೋಜನೆಯಡಿ ಧಾರವಾಡ, ಗದಗ ಮತ್ತು ಹಾವೇರಿ ಜಿಲ್ಲೆಗಳಿಗೆ ಬಿಡುಗಡೆಯಾದ ಅನುದಾನದಲ್ಲಿ ಘನತ್ಯಾಜ್ಯ ವಸ್ತು ನಿರ್ವಹಣೆಯ ಕಾಮಗಾರಿಗಳಾದ ಸಿವಿಲ್ ಮತ್ತು ವಾಹನ ಯಂತ್ರೋಪಕರಣ ಖರೀದಿ ಕಾಮಗಾರಿಗಳನ್ನು ಕೈಗೊಂಡಿದ್ದು ಜಿಲ್ಲಾವಾರು ಕಾಮಗಾರಿಗಳ ಸಂಖ್ಯೆ ಈ ಕೆಳಕಂಡಂತ್ತಿರುತ್ತದೆ;<br><table><tr><td rowspan="2">ಜಿಲ್ಲೆಯ ಹೆಸರು</td><td colspan="2">ಕಾಮಗಾರಿಗಳ ಸಂಖ್ಯೆ</td></tr><tr><td>ಸಿವಿಲ್ ಕಾಮಗಾರಿಗಳ ಸಂಖ್ಯೆ</td><td>ವಾಹನ ಯಂತ್ರೋಪಕರಣ ಖರೀದಿ ಸಂಖ್ಯೆ</td></tr><tr><td>ಧಾರವಾಡ</td><td>60</td><td>35</td></tr><tr><td>ಗದಗ</td><td>129</td><td>110</td></tr><tr><td>ಹಾವೇರಿ</td><td>144</td><td>73</td></tr></table> |
| ಈ | ಬಾಕಿ ಇರುವ ಕಾಮಗಾರಿಗಳನ್ನು ಪೂರ್ಣಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಸ್ವಚ್ಛ ಭಾರತ್ ಮಿಷನ್ (ನಗರ) ಯೋಜನೆಯಡಿ ಬಾಕಿ ಇರುವ ಕಾಮಗಾರಿಗಳನ್ನು ಪೂರ್ಣಗೊಳಿಸಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ:<br>• SBM ಮಾರ್ಗಸೂಚಿಗಳನ್ವಯ ಬಳಕೆ ಪ್ರಮಾಣ ಪತ್ರ ಸಲ್ಲಿಸಿದ ನಂತರ ನಗರ ಸ್ಥಳೀಯ ಸಂಸ್ಥೆಗಳಿಗೆ ಉಳಿಕೆ ಅನುದಾನ ಬಿಡುಗಡೆ ಮಾಡಲು ಕ್ರಮ ವಹಿಸಲಾಗುವುದು.<br>• ಜಿಲ್ಲಾ ಹಾಗೂ ರಾಜ್ಯ ಮಟ್ಟದಲ್ಲಿ ಅನುಷ್ಠಾನದ ಪ್ರಗತಿ ಪರಿಶೀಲನಾ ಸಭೆಗಳನ್ನು ಆಗಿಂದಾಗ್ಗೆ ಆಯೋಜಿಸಿ ಕಾಮಗಾರಿಗಳನ್ನು ಪೂರ್ಣಗೊಳಿಸಲು ಸೂಕ್ತ ನಿರ್ದೇಶನಗಳನ್ನು ನೀಡಲಾಗುತ್ತಿದೆ. |

| | | |
|---|---|---|
| | | • ಘನತ್ಯಾಜ್ಯ ವಸ್ತುಗಳ ಸಂಗ್ರಹಣೆ ಹಾಗೂ ಸಾಗಾಣಿಕೆಗೆ ಅಗತ್ಯವಿರುವ ವಾಹನಗಳನ್ನು ನೇರವಾಗಿ ಜೆಮ್ ಪೋರ್ಟಲ್ ಮೂಲಕ ಖರೀದಿ ಮಾಡಲು ಸರ್ಕಾರದಿಂದ ಕೆ.ಟಿ.ಟಿ.ಪಿ ಅಧಿನಿಯಮ ಕಲಂ (4)ರಡಿ ವಿನಾಯಿತಿಯನ್ನು ನೀಡಲಾಗಿರುತ್ತದೆ.<br>• ಘನತ್ಯಾಜ್ಯ ವಸ್ತು ನಿರ್ವಹಣೆ ಯೋಜನೆಯ ತ್ವರಿತ ಅನುಷ್ಠಾನಕ್ಕಾಗಿ ಘನತ್ಯಾಜ್ಯ ವಸ್ತು ನಿರ್ವಹಣೆಗೆ ಸಂಬಂಧಿಸಿದಂತೆ ಜಿಲ್ಲಾಧಿಕಾರಿಗಳಿಗೆ 5 ಕೋಟಿಗಳ ವರೆಗಿನ ಅಂದಾಜುಗಳಿಗೆ ಅನುಮೋದನೆ ನೀಡುವ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೆ ಪ್ರತ್ಯಾಯೋಜಿಸಲಾಗಿದೆ ಮತ್ತು ರೂ. 5 ಕೋಟಿವರೆಗಿನ ಅಂದಾಜುಗಳಿಗೆ ತಾಂತ್ರಿಕ ಮಂಜೂರಾತಿ ನೀಡಲು ಜಿಲ್ಲಾ ತಾಂತ್ರಿಕ ಸಮಿತಿಯನ್ನು ರಚಿಸಲಾಗಿದೆ.<br>• ಎಲ್ಲಾ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ವಿಶೇಷ ಕಾರ್ಯಪಡೆಯನ್ನು ರಚಿಸಲಾಗಿದೆ. |
| ಉ | ಯೋಜನೆಯ ಅನುಷ್ಠಾನಕ್ಕೆ ವಿಳಂಬ ಮಾಡಿದಂತಹ ಹಾಗೂ ವಿಫಲರಾದ ಅಧಿಕಾರಿಗಳ ವಿರುದ್ಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಸ್ವಚ್ಛ ಭಾರತ್ ಮಿಷನ್ (ನಗರ) ಯೋಜನೆಯ ಅನುಷ್ಠಾನದ ವಿಳಂಬಕ್ಕೆ ಕಾರಣರಾದ ಅಧಿಕಾರಿಗಳ ಮೇಲೆ ಶಿಸ್ತು ಕ್ರಮ ಜರುಗಿಸಲು ಕಾರಣ ಕೇಳ ನೋಟಿಸ್ ಅನ್ನು ಜಾರಿಗೊಳಸಲಾಗಿರುತ್ತದೆ. |

ಸಂಖ್ಯೆ: ನಅಇ 61 ಸಿಎಸ್ಎಸ್ 2021

[ಎನ್. ನಾಗರಾಜ್ (ಎಂ.ಟಿ.ಬಿ.)]
ಪೌರಾಡಳಿತ ಹಾಗೂ ಸಕ್ಕರೆ ಸಚಿವರು.

| 1953 Annexure-1 (Rs in Lakhs) | | | | |
|---|---|---|---|---|
| Sl. No. | District Name | 2019-20 | 2020-21 | Exp |
| | | | | |
| | **12. Dharwad Dist** | | | |
| 1 | Hubli-Dharwad (M Corp.) | 0.000 | 1603.700 | |
| 2 | Annigeri (TMC) | 0.000 | 37.884 | |
| 3 | Navalgund (TMC) | 0.000 | 45.045 | |
| 4 | Kundgol (TP) | 0.000 | 50.036 | |
| 5 | Alnavar (TP) | 0.000 | 37.708 | |
| 6 | Kalghatgi (TP) | 0.000 | 33.135 | |
| | **Total** | **0.000** | **1807.508** | 475.37 |
| | **14. Gadag Dist** | | | |
| 1 | Gadag-Betigeri (CMC) | 25.397 | 576.849 | |
| 2 | Lakshmeshwar (TMC) | 0.000 | 235.294 | |
| 3 | Nargund (TMC) | 0.000 | 190.582 | |
| 4 | Gajendragarh (TMC) | 0.000 | 180.694 | |
| 5 | Mundargi (TMC) | 0.000 | 181.846 | |
| 6 | Ron (TMC) | 0.000 | 187.823 | |
| 7 | Mulgund (TP) | 0.000 | 120.111 | |
| 8 | Shirhatti (TP) | 0.000 | 124.730 | |
| 9 | Naregal (TP) | 0.000 | 102.923 | |
| | **Total** | **25.397** | **1900.852** | 713.3475 |
| | **16. Haveri Dist** | | | |
| 1 | Ranebennur (CMC) | 1.733 | 183.627 | |
| 2 | Haveri (CMC) | 0.000 | 89.994 | |
| 3 | Savanur (TMC) | 3.600 | 72.630 | |
| 4 | Byadgi (TMC) | 0.000 | 72.366 | |
| 5 | Shiggaon (TMC) | 0.000 | 78.438 | |
| 6 | Hangal (TMC) | 0.000 | 52.911 | |
| 7 | Bankapura (TMC) | 0.000 | 90.996 | |
| 8 | Hirekerur (TP) | 0.067 | 39.813 | |
| 9 | Guttala (TP) | 1.467 | 0.000 | |
| | **Total** | **6.867** | **680.775** | 273.1667 |
| | | 32.264 | 4389.135 | **1461.884** |

Geetha
(MIS-Specialist)

Shalalatha
19/3
Executive Engineer
Directorate of Municipal Administration
Bangalore.